


2

# ಮನುಷ್ಯನ ಕತೆ

ಅಡ್ಯನಡ್ಕ ಕೃಷ್ಣಭಟ್ಟ







# ಮನುಷ್ಯನ ಕತೆ

# ಅಡ್ಯನಡ್ಕ ಕೃಷ್ಣ ಭಟ್ಟ

## ವಿ–ಪ್ರಕಟಣೆಗೊಂದು ಮಾತು

ಜಿ.ಟಿ ನಾರಾಯಣರಾಯರ 'ಆಕಾಶದ ಅದ್ಭುತಗಳು' ವಿ–ಪುಸ್ತಕವನ್ನು ಇಲ್ಲಿ ಮೊದಲು ಏರಿಸುವಾಗ ಉಲ್ಲೇಖಿಸಿದ, ಅದೇ ಮಾಲಿಕೆಯ ಇನ್ನೊಂದು ಪುಸ್ತಕ 'ಮನುಷ್ಯನ ಕತೆ'ಯನ್ನು ಈಗ ಇಲ್ಲಿ ಮುಕ್ತಗೊಳಿಸಲು ಸಂತೋಷಿಸುತ್ತೇನೆ. ಆಕಾಶದ ಅದ್ಭುತಗಳು ಏರಿಸಿದ ಬೆನ್ನಿಗೇ 'ವಿಜ್ಞಾನ ನೋಡು ಕಲಿ' ಮಾಲೆಯಲ್ಲಿ ಪಾಲ್ಗೊಂಡಿದ್ದರೆಂದು ನೆನಪಿನಲ್ಲಿದ್ದ ಶ್ರೀ ಅಡ್ಯನಡ್ಕ ಕೃಷ್ಣ ಭಟ್ ಮತ್ತು ಶ್ರೀ ನಿಸಾರ್ ಅಹಮದ್ ಅವರುಗಳಿಗೆ ನಾನು ಬರೆದ ಪತ್ರ ಸಾರಾಂಶ ಹೀಗಿದೆ:

ವಿ–ಪುಸ್ತಕದ ಉಚಿತ ಪ್ರಕಟಣೆಯಲ್ಲಿ ನಿಮಗೆ ಆಸಕ್ತಿ ಇದ್ದರೆ (ನಿಮಗೇನೂ ಸಂಭಾವನೆ ಬರದು ಮತ್ತು ಖರ್ಚೂ ಇರದು) ದಯವಿಟ್ಟು ನಿಮ್ಮ ಪುಸ್ತಕಗಳ (ಭೂಮಿಯ ಕತೆ, ಹಕ್ಕಿಗಳು, ಶಿಲೆಗಳು ಮತ್ತು ಖನಿಜಗಳು ಇತ್ಯಾದಿ) ಒಂದೊಂದು ಪ್ರತಿಯನ್ನು **ನಿಮ್ಮ ಅನುಮೋದನೆಯೊಡನೆ** ಕಳಿಸಿಕೊಡಬೇಕಾಗಿ ವಿನಂತಿ. ಹಾಗೇ ಅನೌಪಚಾರಿಕವಾಗಿ ನನ್ನ ತಂದೆಯೊಡನೆ ಈ ಮಾಲಿಕೆಯ ಕುರಿತ ನಿಮ್ಮ ನೆನಪುಗಳನ್ನೂ ಬರೆದು ಕಳಿಸಿದರೆ ಸೇರಿಸಿಕೊಳ್ಳುತ್ತೇನೆ ಮತ್ತು ಅವೂ ಜಾಲತಾಣದಲ್ಲಿ ಸಾರ್ವಕಾಲಿಕ ದಾಖಲೆಗಳಾಗಿ ಉಳಿಯುತ್ತವೆ.

ನನ್ನ ಮನವಿಗೆ ತಕ್ಷಣದ ಸ್ಪಂದನ ತೋರಿ, ನಕಲು ಮಾಡಲು ಅವರ ಪುಸ್ತಕದ ಪ್ರತಿಯೊಂದರ ಜೊತೆಗೆ ಕೆಳಕಾಣಿಸಿದ ಟಿಪ್ಪಣಿಯನ್ನೂ ಬರೆದು ಕಳಿಸಿದ ಅಡ್ಯನಡ್ಕ ಕೃಷ್ಣ ಭಟ್ಟರಿಗೆ ಕೃತಜ್ಞತೆಗಳು.

**ಜಿ.ಎನ್ ಅಶೋಕ ವರ್ಧನ**

## ಕನ್ನಡದಲ್ಲಿ ಮಕ್ಕಳ ವಿಜ್ಞಾನ ಸಾಹಿತ್ಯ ಮತ್ತು ಜಿ.ಟಿ ನಾರಾಯಣರಾವ್
## ಲೇಖಕನ ಮಾತು: ಅಡ್ಯನಡ್ಕ ಕೃಷ್ಣ ಭಟ್ಟ

ಕನ್ನಡದಲ್ಲಿ ಮಕ್ಕಳಿಗಾಗಿ ವಿಜ್ಞಾನ ಸಾಹಿತ್ಯದ ಬೆಳವಣಿಗೆ ಹೊಸ ಆಯಾಮ ಪಡೆದದ್ದು ೨೦ನೇ ಶತಮಾನದ ೭ನೇ ಮತ್ತು ೮ನೇ ದಶಕಗಳಲ್ಲಿ. ದಕ್ಷಿಣ ಕನ್ನಡದ ಶ್ರೀನಿವಾಸನಗರದಿಂದ 'ವಿಜ್ಞಾನಲೋಕ' ಪತ್ರಿಕೆ ೧೯೬೬ರಿಂದ ಪ್ರಕಟವಾಗತೊಡಗಿತು. ಅದನ್ನು ಪ್ರಕಟಿಸುತ್ತಿದ್ದ 'ವಿಜ್ಞಾನ ಪ್ರತಿಷ್ಠಾನ'ದ ಬೆನ್ನೆಲುಬಾಗಿದ್ದವರು ಪಾ.ದೇವರಾಯರು. ಬೆಂಗಳೂರಿನ ಸಹಕಾರೀ ಪ್ರಕಾಶನ ಮಂದಿರವು ೧೯೬೮ರಲ್ಲಿ ಪ್ರಾರಂಭಿಸಿದ ಕಿರಿಯರ ವಿಶ್ವಕೋಶ – ಜ್ಞಾನಗಂಗೋತ್ರಿ, ಯೋಜನೆಯಲ್ಲಿ ಏಳು ಸಂಪುಟಗಳಿದ್ದುವು. ಅವುಗಳಲ್ಲಿ ಮೂರು ಸಂಪುಟಗಳು – ಭೌತ ಜಗತ್ತು, ಜೀವ ಜಗತ್ತು, ಯಂತ್ರ ಜಗತ್ತು – ವಿಜ್ಞಾನಕ್ಕೆ ಮೀಸಲಾಗಿದ್ದುವು. ಇದರ ಪ್ರಧಾನ ಸಂಪಾದಕರು ನಿರಂಜನ. ಮುಂದೆ ಸುಧಾ ವಾರ ಪತ್ರಿಕೆಯಲ್ಲಿ ವಿವಿಧ ವಿಷಯಗಳ ವಿವರಗಳು ವಾರ ವಾರವೂ ಅಂಕಣ ರೂಪದಲ್ಲಿ ಬರತೊಡಗಿದುವು. ಜಿಟಿ ನಾರಾಯಣರಾಯರ ಪ್ರೇರಣೆ ಮತ್ತು ಉತ್ಸಾಹ ಈ ನಿಯತ ಪ್ರಕಟಣೆಗಳ ಹಿಂದೆ ಇತ್ತು.

ಜಿಟಿ ನಾರಾಯಣರಾಯರು 'ವಿಜ್ಞಾನ ಲೋಕ'ಕ್ಕೆ ಲೇಖನ ಬರೆದರು. ಅವರು ಜ್ಞಾನಗಂಗೋತ್ರಿಯ ಸಂಪಾದಕ ಮಂಡಲಿಯ ಸದಸ್ಯರಾಗಿದ್ದರು. ಈ ಹಿಂದೆಯೇ ಹೇಳಿದಂತೆ ಮಕ್ಕಳಿಗಾಗಿರುವ ವಿಜ್ಞಾನ ಸಾಹಿತ್ಯ ನಿರ್ಮಾಣದ ಯೋಜನೆಗಳ ಯಶಸ್ಸಿಗೆ ದುಡಿದರು. ತನ್ನಂತೆಯೇ ಆಸಕ್ತಿ ಇರುವ ಬರಹಗಾರರನ್ನು ಸಂಪರ್ಕಿಸಿ ಈ ಎಲ್ಲ ಕೆಲಸಗಳಿಗೆ ಬೇಕಾದ ತಂಡಗಳನ್ನು ಕಟ್ಟುವುದು ಅವರು ತಮಗೇ ಹಾಕಿಕೊಂಡ ಪಂಥಾಹ್ವಾನ. ಯುಕ್ತ ಪದಗಳ ಆಯ್ಕೆ, ಸರಿಯಾದ ವಾಕ್ಯರಚನೆ ಮತ್ತು ಯಾವುದೇ ಪರಿಕಲ್ಪನೆಯ ಅಸಂದಿಗ್ಧ ಚಿತ್ರಣ ಅವರು ತಾವಾಗಿ ಇರಿಸಿಕೊಂಡ ಗುರಿಗಳು. ಇದನ್ನು ಸಾಧಿಸುತ್ತಿರುವಾಗ ಅವರಿಗೆ ಹೊತ್ತು ಗೊತ್ತಿನ ಪರಿವೆ ಇರುತ್ತಿರಲಿಲ್ಲ. ಆಕಸ್ಮಿಕವಾಗಿ ಯುಕ್ತ ಪದವೊಂದು ತೋರಿದಾಗ (ಅಥವಾ ಇತರರು ತೋರಿಸಿದಾಗ) ಅಮೂಲ್ಯ ರತ್ನವೊಂದನ್ನು ಬಾಚುವಂತೆ ತೆಗೆದುಕೊಂಡು ಪದಗಳ ತಮ್ಮ ಖಜಾನೆಯಲ್ಲಿ ಸ್ಥಾನ ಕೊಡುತ್ತಿದ್ದರು.

ಇದೇ ಕಾಲಘಟ್ಟದಲ್ಲಿ ಬೆಂಗಳೂರಿನ ಐಬಿಎಚ್ ಪ್ರಕಾಶನದವರು ಎರಡು ಹೊಸ ಯೋಜನೆಗಳನ್ನು ಎತ್ತಿಕೊಂಡರು. ಒಂದನೆಯದ್ದು – ಎಲ್ಲ ವಿಜ್ಞಾನ ವಿಭಾಗಗಳಲ್ಲೂ ಯುಕ್ತ ವರ್ಣ ಚಿತ್ರಗಳಿರುವ ಹಾಗೂ ಸರಳ ಲೇಖನಗಳನ್ನು ಒಳಗೊಂಡ Understanding Science ಸಂಚಿಕೆಗಳ ಕನ್ನಡ ಅವತರಣಿಕೆ. ಮೂಲ ಪ್ರಕಟಣೆಯಲ್ಲಿ ನೊಬೆಲ್ ಪ್ರಶಸ್ತಿ ಪುರಸ್ಕೃತರಾದ ಲಾರೆನ್ಸ್ ಬ್ರಾಗ್ ಮತ್ತು ಜೇಮ್ಸ್ ಚಾಡ್‌ವಿಕ್‌ರನ್ನು ಒಳಗೊಂಡ ಸಂಪಾದಕ ಸಮಿತಿಯಿತ್ತು. ಕನ್ನಡದಲ್ಲಿ ಈ ಸಂಚಿಕೆಗಳ ಮಾಲೆಯನ್ನು 'ವಿಜ್ಞಾನ ಪರಿಚಯ' (ಎಲ್ಲರಿಗೆ ವಿಜ್ಞಾನ) ಎಂದು ಕರೆದರು. ಇದಕ್ಕೆ ಜಿಟಿ ನಾರಾಯಣರಾಯರು ಸಂಯೋಜಕರಾಗಿದ್ದರು. ಐಬಿಎಚ್ ಪ್ರಕಾಶನ ಎತ್ತಿಕೊಂಡ ಮತ್ತೊಂದು ಯೋಜನೆ – ವಿಜ್ಞಾನ ನೋಡು ಕಲಿ. ವಿಜ್ಞಾನದ ಒಂದು ವಿಷಯವನ್ನು (ಆಕಾಶದ ಅದ್ಭುತಗಳು, ಹಕ್ಕಿಯ ಕತೆ ಇತ್ಯಾದಿ) ಎತ್ತಿಕೊಂಡು, ವರ್ಣಚಿತ್ರಗಳ ಸಮೇತವಾಗಿ ವಿವರಣೆಯನ್ನು ಸ್ವತಂತ್ರ ಕೃತಿಗಳಲ್ಲಿ ಕಟ್ಟಿಕೊಡುವುದು ಇಲ್ಲಿಯ ಗುರಿ. ಚಿತ್ರ ಭಾಷೆಗಳ ಸಮನ್ವಯಕ್ಕೆ ಇಲ್ಲಿ ಪ್ರಾಧಾನ್ಯ. ವಿಜ್ಞಾನವನ್ನು ನೋಡಿ ಕಲಿಯಲು, ಓದಿ ತಿಳಿಯಲು ಮತ್ತು ಮಾಡಿ ನೋಡಲು ಸಾಕಷ್ಟು ಖಚಿತ ಮತ್ತು ಆಕರ್ಷಕ ಪುಸ್ತಕಗಳು ಕನ್ನಡದಲ್ಲಿ ಬರಬೇಕೆಂಬುದು ಇಂಥ ಕೃತಿ ರಚನೆಯ ಆಶಯವಾಗಿತ್ತು. ಜಿಟಿ ನಾರಾಯಣರಾಯರು ಈ ಮಾಲೆಯ ಸಂಪಾದಕರಾಗಿದ್ದರು. ಈ ಎರಡೂ ಯೋಜನೆಗಳಡಿಯಲ್ಲಿ ಬೆರಳೆಣಿಕೆಯ ಕೃತಿಗಳು ಪ್ರಕಟವಾದುವು. ಇವುಗಳ ಅನಂತರ ಆ ಮಟ್ಟದ ಕೃತಿಗಳು ಕನ್ನಡದಲ್ಲಿ ಬರಲಿಲ್ಲ ಎಂದರೆ ಅತಿಶಯೋಕ್ತಿಯಾಗದು.

* * *

ಅತ್ರಿ ವಿ–ಪುಸ್ತಕಗಳು
ಅಭಯಾದ್ರಿ, ಪಿಂಟೋರವರ ಓಣಿ
ಕರಂಗಲ್ಪಾಡಿ, ಮಂಗಳೂರು ೫೭೫೦೦೩
ದೂರವಾಣಿ ೦೮೨೪–೨೪೯೨೩೯೭
ಮಿಂಚಂಚೆ: athreebook@gmail.com
ಜಾಲತಾಣ: www.athreebook.com



ಸಂಪಾದಕ **ಜಿ. ಟಿ. ನಾರಾಯಣರಾವ್**

ಚಿತ್ರಶಿಲ್ಪಿ **ಚಂದ್ರನಾಥ್**

ಪ್ರಕಾಶಕ **ಪಿ. ಎನ್. ಕಾಮತ್**
ಐಬಿಎಚ್ ಪ್ರಕಾಶನ, ಗಾಂಧಿನಗರ, ಬೆಂಗಳೂರು 560 009

ನಿರ್ದೇಶಕ **ಜಿ. ಕೆ. ಅನಂತರಾಮ್**

ಮುದ್ರಕ **ಹರಿ ಕೆ. ನಾಷ್ಟಾ**, ಐಬಿಎಚ್ ಪ್ರಿಂಟರ್ಸ್, ಮುಂಬಯಿ 400 05



ವಿತರಣೆ **ಇಂಡಿಯ ಬುಕ್ ಹೌಸ್**, ಗಾಂಧಿನಗರ, ಬೆಂಗಳೂರು 560 009

ಬೆಲೆ ರೂ **5**

**ವಿಜ್ಞಾನ ನೋಡು ಕಲಿ** ಪುಸ್ತಕಮಾಲೆಯಲ್ಲಿ ಹೆಸರೇ ಸೂಚಿಸುವಂತೆ ನೋಡುವುದು ಮೊದಲು, ಕಲಿಯುವುದು ಬಳಿಕ.

ಪ್ರಪಂಚವೇ ಚೆಲುವಿನ ಬೀಡು. ಇನ್ನು ಮಗುವೋ ಮೈವೆತ್ತ ಚೆಲುವು. ಮಗುವಿನ ಒಳಗೂ ಹೊರಗೂ ಇರುವ ಚೆಲುವೇನು, ಅದರ ತಳದಲ್ಲಿ ಇರುವ ಕ್ರಮವೇನು, ಹಿನ್ನೆಲೆಯಲ್ಲಿ ಹುದುಗಿರುವ ಕಾರಣವೇನು — ಇವುಗಳತ್ತ ಮಗುವಿನ ಲಕ್ಷ್ಯ ಸೆಳೆಯುವುದು ಇಲ್ಲಿನ ಉದ್ದೇಶ. ಎಂದೇ ಚಿತ್ರಗಳಿಗೆ ಇಲ್ಲಿ ಪ್ರಾಮುಖ್ಯ.

ಇಲ್ಲಿನ ಯಾವುದೇ ಚಿತ್ರವನ್ನು ಮಗು ಗಮನಿಸಿದಾಗ ಅದರ ಮನಸ್ಸಿನಲ್ಲಿ ಮಿಂಚುವ ಭಾವನೆಗಳೇನು ? ಬದುಕಿನಲ್ಲಿ ಮಗು ಕಂಡು ಅಚ್ಚರಿಗೊಂಡ ನೋಟಗಳು ಹಲವಾರು. ಅವುಗಳ ಪೈಕಿ ಯಾವುದೋ ಒಂದನ್ನು ಅದು ಇಲ್ಲಿ ಗುರುತಿಸಬಹುದು. ಅಥವಾ ಹೇಳುವಂಥ ಕಾರಣವೇನೂ ಇಲ್ಲದೆ ಅಲ್ಲಿನ ಯಾವುದೊ ಅನುಭವವನ್ನು ಇಲ್ಲಿನ ಒಂದು ಚಿತ್ರ ಅದರ ನೆನಪಿಗೆ ತರಬಹುದು. ಈ ತೆರನಾಗಿ ಮಗುವಿನ ವಿಶೇಷ ಪ್ರಯತ್ನವಿಲ್ಲದೆ ಅದರ ಕುತೂಹಲವನ್ನು ಪ್ರೇರಿಸುವುದು ಮೊದಲ ಹಂತ. ಮತ್ತೆ ಅದಕ್ಕೆ ಪೋಷಕವಾಗಿ ಬರವಣಿಗೆಯಲ್ಲಿ ವಿಷಯವನ್ನು ನಿರೂಪಿಸುವುದು ಎರಡನೆಯ ಹಂತ.

ಗೊತ್ತಿರುವ 'ಇಲ್ಲಿ'ಂದ ಗೊತ್ತಿಲ್ಲದ 'ಅಲ್ಲಿ'ಗೆ ಮಗುವನ್ನು ಅದರ ಅರಿವಿಗೆ ಬಾರದಂತೆ ಒಯ್ಯುವುದೇ ಮಾತಿನಲ್ಲಿ ಹುದುಗಿರುವ ಮೋಡಿ. ಇದಕ್ಕಾಗಿ ನಮ್ಮ ಸಂಸ್ಕೃತಿಯ ಕತೆ ಕಲ್ಪನೆ ಪ್ರತೀಕಗಳನ್ನು ಅರ್ಥವತ್ತಾಗಿ ಬಳಸಿಕೊಂಡಿದೆ. ಜ್ಞಾನ ಹೊಸ ಸೀಮೆಗಳಿಗೆ ನೆಗೆದಂತೆ ಭಾಷೆ ಅದರೊಂದಿಗೆ ಸಮಶ್ರುತಿ ಸಮಲಯದಲ್ಲಿ ಮಿಡಿಯಲೇಬೇಕು ಎಂಬುದನ್ನು ಗಮನಿಸಿ ಹದವರಿತು ಹೊಸ ಪದಗಳಿಗೆ ಇಲ್ಲಿ ವಿವರಣೆಯೊಂದಿಗೆ ಪ್ರವೇಶ ನೀಡಿದೆ.

ಹೀಗೆ ಚಿತ್ರ–ಭಾಷೆ ಸಮನ್ವಯದಿಂದ ಈ ಮಾಲೆ ಮೈದಳೆದಿದೆ. ಸಾಂಪ್ರದಾಯಿಕ ಪಠ್ಯ ಮತ್ತು ಉಪಪಠ್ಯ ಪುಸ್ತಕಗಳಲ್ಲಿ ಮಗುವಿಗೆ ದೊರೆಯದ ಮಾಹಿತಿಗಳು ಅತ್ಯಂತ ಸುಲಭ ಹಾಗೂ ರೋಚಕ ರೂಪದಲ್ಲಿ ಇಲ್ಲಿ ದೊರೆಯುತ್ತವೆ.

ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಕ್ಷೇತ್ರದಲ್ಲಿ ವಿದ್ಯಾರ್ಥಿಗಳಿಗೆ ವಿಜ್ಞಾನವನ್ನು ನೋಡಿ ಕಲಿಯಲು, ಓದಿ ತಿಳಿಯಲು ಮತ್ತು ಮಾಡಿ ನೋಡಲು ಸಾಕಷ್ಟು ಉಚಿತ ಮತ್ತು ಆಕರ್ಷಕ ಪುಸ್ತಕಗಳು ಕನ್ನಡದಲ್ಲಿ ಇಲ್ಲ. ಹೀಗಾಗಿ ಕನ್ನಡ ಮಕ್ಕಳ ವಿದ್ಯಾಭ್ಯಾಸ ಅಷ್ಟರ ಮಟ್ಟಿಗೆ ವೃಥಾ ಬರಡಾಗಿದೆ. ಈ ಕೊರತೆಯನ್ನು ತುಂಬಲು ಸ್ವಲ್ಪಮಟ್ಟಿಗಾದರೂ **ವಿಜ್ಞಾನ ನೋಡು ಕಲಿ** ಮಾಲೆಯ ಪುಸ್ತಕಗಳು ನೆರವಾಗಬಹುದೆಂದು ಆಶಿಸುತ್ತೇವೆ.



# ಮನುಷ್ಯನ ಕತೆ



## ಜೀವಿ, ಅಜೀವಿ

ನಮಗೆ ಕಾಣುವ ವಸ್ತುಗಳನ್ನು ಎರಡು ಬಗೆಯುವಾಗಿ ವಿಭಾಗಿಸಬಹುದು: ಜೀವ ಇರುವವು, ಜೀವ ಇಲ್ಲದವು. ಅಥವಾ ಜೀವಿಗಳು, ಅಜೀವಿಗಳು. ಅಡ್ಡಾಡಿ ಬದುಕುವ ಜೀವಿಗಳಿವೆ. ಇವು ಪ್ರಾಣಿಗಳು. ಒಂದೇ ಕಡೆ ನೆಲೆಸಿ ಬಾಳುವ ಜೀವಿಗಳೂ ಇವೆ. ಇವು ಸಸ್ಯಗಳು.



## ಮಾನವ ಜನುಮ ದೊಡ್ಡದು

ಮನುಷ್ಯನ ಲಕ್ಷಣಗಳನ್ನು ನೋಡಿದಾಗ ಅವನು ಸಹ ಪ್ರಾಣಿ ಎಂದು ತಿಳಿಯುತ್ತದೆ. ಒಬ್ಬ ಮನುಷ್ಯನನ್ನು ಇನ್ನೊಬ್ಬನಿಗಿಂತ ಬೇರೆಯಾಗಿ ಗುರುತಿಸಬಲ್ಲೆವು. ಹಾಗೆಯೇ ಇತರ ಯಾವುದೇ ಪ್ರಾಣಿಗಿಂತ ಮನುಷ್ಯ ಬೇರೆಯಾಗಿಯೂ ಕಾಣುವನು. ಕೆಲವು ಪ್ರಾಣಿಗಳು ಹೋಲಿಕೆಯಲ್ಲಿ ಮನುಷ್ಯನಿಗೆ ಹತ್ತಿರದವಾಗಿ ತೋರುವುವು. ಇನ್ನು ಹಲವು ದೂರದವಾಗಿ ಕಾಣುವುವು.

ಗೊರಿಲ, ಚಿಂಪ್ಯಾಂಜಿಗಳು ವಾನರರು. ಮನುಷ್ಯರೊಂದಿಗೆ ಅವಕ್ಕೆ ಇತರ ಪ್ರಾಣಿಗಳಿಗಿಂತ ಹೆಚ್ಚು ಹೋಲಿಕೆ ಇದೆ. ವಸ್ತುಗಳನ್ನು ಹಿಡಿಯಲು ಅವಕ್ಕೆ ಐದು ಬೆರಳುಗಳಿವೆ. ಅವು ಕುಟುಂಬ ಪ್ರಾಣಿಗಳು. ಕೆಲವು ಹೊಸ ಕೆಲಸಗಳನ್ನು ಕಲಿಯುವ ತ್ರಾಣವೂ ಅವಕ್ಕಿದೆ. ಆದರೆ ಮನುಷ್ಯನಂಥ ದೊಡ್ಡ ಮಿದುಳಾಗಲಿ ಸ್ಪಷ್ಟವಾಗಿ ಮಾತಾಡಬಲ್ಲ ಸಾಮರ್ಥ್ಯವಾಗಲಿ ಅವುಗಳಿಗಿಲ್ಲ. ಬಗೆಬಗೆಯ ಹತ್ಯಾರುಗಳನ್ನು ಅವು ಎಂದೂ ತಯಾರಿಸಲಾರವು.

ಭೂಮಿಯ ಮೇಲೆ ಮನುಷ್ಯ ಮತ್ತು ಇತರ ಪ್ರಾಣಿ ಎಲ್ಲವೂ ಒಂದೇ ಬಾರಿಗೆ ಉಂಟಾದುವು ಎಂದು ಹಿಂದೆ ನಂಬಲಾಗಿತ್ತು. ಈ ನಂಬಿಕೆ ಸರಿಯಲ್ಲ ಎಂದು ಇಂಗ್ಲೆಂಡಿನ ಚಾರ್ಲ್ಸ್ ಡಾರ್ವಿನ್ (1809–1882) ಹೇಳಿದ. ಗತಕಾಲದಲ್ಲಿ ಭೂಮಿಯಲ್ಲಿದ್ದ ಪ್ರಾಣಿಗಳು ಬದಲಾಗುತ್ತ (ಅಭಿವರ್ಧಿಸುತ್ತ, ಅಂದರೆ ಹೊಸ ಬಗೆಯವುಗಳಾಗಿ ಪರಿವರ್ತನೆಗೊಳ್ಳುತ್ತ) ಕಾಲಾಂತರದಲ್ಲಿ ಅನೇಕ ತರದ ಪ್ರಾಣಿಗಳಿಗೆ ಕಾರಣವಾದವೆಂದು ಅವನು ಹೇಳಿದ. ಇಂಥ ಅಭಿವರ್ಧನೆಗೆ ಜೀವವಿಕಾಸ ಎಂದು ಹೆಸರು.




'ಪ್ರಾಣಿರಾಜ್ಯ'ವೆಂಬ ಮರದ ಬುಡದ ತೋರ ಕಾಂಡದಿಂದ 'ವಂಶ'ಗಳೆಂಬ ಹಲವಾರು ಶಾಖೆಗಳು ಕವಲೊಡೆದಿವೆ. ಮನುಷ್ಯನಿಗೆ ಕಾರಣವಾದ 'ವಂಶ' ಶಾಖೆಯನ್ನು ಮಾತ್ರ ಇಲ್ಲಿ ತೋರಿಸಿದೆ.

ಮನುಷ್ಯನ ವರ್ಗೀಕರಣ

| | | |
|---|---|---|
| ವರ್ಗ | ... | ಮ್ಯಾಮೇಲಿಯ (ಸ್ತನಿ) |
| ಉಪವರ್ಗ | ... | ಪ್ಲಾಸೆಂಟೇಲಿಯ (ಜರಾಯುಯುತ) |
| ಗಣ | ... | ಪ್ರೈಮೇಟುಗಳು |
| ಉಪಗಣ | ... | ಆಂತ್ರಪಾಯ್ಡಿಯ |
| ಕುಟುಂಬ | ... | ಹೋಮಿನಿಡೀ |
| ಜಾತಿ | ... | ಹೋಮೊ |

## ಪ್ರಾಣಿಗಳ ವರ್ಗೀಕರಣ

ದೊಡ್ಡದಾದ ಒಂದು ಮರವನ್ನು ನೋಡು. ಅದು ಬೆಳೆದು ಬಂದದ್ದು ಹೇಗೆ ? ಮೊದಲು ಚಿಕ್ಕ ಗಿಡವಿತ್ತು. ಅದು ಕ್ರಮೇಣ ಅಭಿವರ್ಧಿಸಿ ಹಿರಿಯ ಮರವಾಯಿತು. ಈಗ ಅದರಲ್ಲಿ ನೂರಾರು ಕೊಂಬೆ ರೆಂಬೆಗಳಿವೆ. ಬುಡದ ಶಾಖೆಗಳು ಸಾಕಷ್ಟು ತೋರವಾಗಿವೆ. ಅಷ್ಟೇ ಅಲ್ಲ. ಅವು ಒಂದರಿಂದ ಇನ್ನೊಂದು ದೂರ ದೂರವಾಗಿಯೂ ಇವೆ. ಬಲಿತ ಕೊಂಬೆಗಳಿಂದ ಟಿಸಿಲೊಡೆದ ಎಳೆ ರೆಂಬೆಗಳು ಪಕ್ಕಪಕ್ಕದಲ್ಲಿ ಹರಡಿಕೊಂಡಿವೆ. ಪ್ರಾಣಿ ಪ್ರಪಂಚ ವಿಕಸಿಸಿ ವಿವಿಧ ಪ್ರಭೇದಗಳು ತಲೆದೋರಿರುವ ಪರಿಯನ್ನು ವಿವರಿಸಲು ಇಂಥ ಒಂದು ಮರದ ಉದಾಹರಣೆಯನ್ನು ನೀಡುವುದುಂಟು.

ಚಿತ್ರದಲ್ಲಿ ತೋರಿಸಿರುವ ಮರದ ಶಾಖೆಯನ್ನು ನೋಡು. ಅದನ್ನು ಧರಿಸಿರುವ ಮರ ಸಮಗ್ರ ಪ್ರಾಣಿ ಪ್ರಪಂಚವನ್ನು ಪ್ರತಿನಿಧಿಸುತ್ತದೆ. ಶಾಖೆಯ ತುತ್ತತುದಿಯಲ್ಲಿರುವ ಒಂದು ರೆಂಬೆಯಲ್ಲಿ ಮನುಷ್ಯ ಇದ್ದಾನೆ. ಇದರ ಅರ್ಥ ಪ್ರಾಣಿ ಪ್ರಪಂಚದ ವಿಕಾಸದಲ್ಲಿ ಮನುಷ್ಯ ತೀರ ಈಚೆಗಿನವ ಎಂದು.




ಹೆಚ್ಚಿನ ಹೋಲಿಕೆ ಇರುವ ಪ್ರಾಣಿಗಳೆಲ್ಲ ಒಂದೇ **ಪ್ರಭೇದ**ಕ್ಕೆ ಸೇರಿವೆ. ಆದ್ದರಿಂದಲೇ ಮನುಷ್ಯರೆಲ್ಲರೂ, ಅವರು ಭಾರತದಲ್ಲಿರಲಿ ಚೀನದಲ್ಲಿರಲಿ ಆಫ್ರಿಕದಲ್ಲಿರಲಿ ಉತ್ತರ ಮೇರುವಲಯದಲ್ಲೇ ಇರಲಿ, ಒಂದೇ ಪ್ರಭೇದಕ್ಕೆ ಸೇರಿದವರು. ಪ್ರಭೇದ ರೆಂಬೆಗಳೆಲ್ಲವೂ ಸೇರಿ ಆಗಿರುವ ಹಿರಿರೆಂಬೆಗೆ **ಜಾತಿ** ಎಂದು ಹೆಸರು. ಜಾತಿ ರೆಂಬೆಗಳು **ಕುಟುಂಬ** ಎಂಬ ಹೆಸರಿನ ತೋರವಾದ ಕೊಂಬೆಯಿಂದ ಟಿಸಿಲೊಡೆದಿವೆ. ಇನ್ನೂ ಕೆಳಗಿಳಿದಾಗ ಈ ಕುಟುಂಬ ಕೊಂಬೆಗಳು **ಗಣ** ಎಂಬ ಹೆಸರಿನ ಶಾಖೆಯಲ್ಲಿ ಒಟ್ಟುಗೂಡುವುದನ್ನು ಕಾಣುವೆ, ಅಲ್ಲವೇ ? ಗಣಶಾಖೆಗಳು ಕವಲೊಡೆದಿರುವುದು **ವರ್ಗ** ಎಂಬ ಹೆಸರಿನ ಶಾಖೆಗಳಿಂದ. ಹಲವಾರು ವರ್ಗ ಶಾಖೆಗಳು **ವಂಶ** ಎಂಬ ಹೆಸರಿನ ದೊಡ್ಡ ಶಾಖೆಯಿಂದ ಹೊರಡುತ್ತವೆ. ವಂಶ ಶಾಖೆಗಳು ಪ್ರಾಣಿಪ್ರಪಂಚ ಎಂಬ ಮರದ ಮೂಲ ಕಾಂಡದಲ್ಲಿ ಸಂಗಮಿಸುತ್ತವೆ.

ಪ್ರಾಣಿ ಪ್ರಪಂಚದಲ್ಲಿ ವಿವಿಧ ವಂಶ, ವರ್ಗ, ಗಣ, ಕುಟುಂಬ, ಜಾತಿ, ಪ್ರಭೇದ ಹಾಗೂ ಉಪಪ್ರಭೇದಗಳಿಗೆ ಸೇರಿರುವ ಜೀವಿಗಳನ್ನು ಗುರುತಿಸಲಾಗಿದೆ.

ಹಾಗಾದರೆ ಪ್ರಾಣಿವಿಕಾಸದಲ್ಲಿ ವಾನರ ಮತ್ತು ಮನುಷ್ಯ ಯಾವ ಕವಲಿನಿಂದ ಹುಟ್ಟಿದರು ? ಮನುಷ್ಯ ವಾನರನಿಗಿಂತ ಬೇರೆಯಾಗಿ ಹೇಗೆ ವಿಕಾಸ ಹೊಂದಿದ? ಈ ಪ್ರಶ್ನೆಗಳಿಗೆ ಉತ್ತರ ಪಡೆಯಲು ವಿಜ್ಞಾನಿಗಳು ಗತ ಕಾಲದ ಪ್ರಾಣಿಗಳ ಮತ್ತು ಮನುಷ್ಯರ ಅವಶೇಷಗಳನ್ನು ಪತ್ತೆಮಾಡಿ ಸಂಗ್ರಹಿಸಿದ್ದಾರೆ. ಅಂದಿನ ಮನುಷ್ಯ ತಯಾರಿಸಿದ್ದ ಹತ್ಯಾರುಗಳನ್ನು ಕಲೆಹಾಕಿ ಅವನು ಬಾಳಿದ ಬಗೆಯನ್ನು ಅರಿಯಲು ಯತ್ನಿಸಿದ್ದಾರೆ. ತಲೆ ಬುರುಡೆ, ಕಾಲಿನ ಮೂಳೆ, ಕಲ್ಲಿನ ಕವಣೆ, ಗುಹೆಗಳಲ್ಲಿ ಕಂಡ ಚಿತ್ರ, ಕುಡಿಕೆ, ಮಡಕೆ ಈ ಒಂದೊಂದೂ ಅಂದಿನ ಮನುಷ್ಯನ ಬಗ್ಗೆ ಎಷ್ಟೋ ಮಾಹಿತಿಗಳನ್ನು ವಿಜ್ಞಾನಿಗಳಿಗೆ ಒದಗಿಸಿವೆ. ಇವೆಲ್ಲವನ್ನೂ ಅವರು ನುರಿತ ಪತ್ತೇದಾರಿಯ ಜಾಣ್ಮೆಯಿಂದ ಕಲೆಹಾಕಿ ಅಳವಡಿಸಿ ಹಿಂದೆ ನಡೆದ ಕತೆಯನ್ನು ಮತ್ತೆ ಬರೆದಿದ್ದಾರೆ. ಇದೇ ಮನುಷ್ಯನ ಕತೆ.


ಒರಾಂಗೂಟಾನ್
ಗೊರಿಲ
ಚಿಂಪಾಂಜಿ
ಹೋಮೊ ಸೇಪಿಯನ್ಸ್ ಸೇಪಿಯನ್ಸ್
ಹೋಮೊ ಸೇಪಿಯನ್ಸ್
ಪ್ರೀಸೇಪಿಯನ್ಸ್
ಹೋಮೊ ಸೇಪಿಯನ್ಸ್
ನಿಯಾಂಡರ್ತಾಲೆನ್ಸಿಸ್
ಪ್ಯಾರಾಂತ್ರೊಪಸ್
ರೊಬಸ್ಟಸ್
ಹೋಮೊ ಸೇಪಿಯನ್ಸ್
ಸ್ಟೈನ್‌ಹೈಮೆನ್ಸಿಸ್
ಜೈಗ್ಯಾಂಟೊಪಿತೆಕಸ್
ಪ್ಲೈಸ್ಟೊಸೀನ್
20,00,000 ವರ್ಷಗಳು
ಆಸ್ಟ್ರಲೊಪಿತೆಕಸ್ ಆಫ್ರಿಕಾನಸ್
ಹೋಮೊ
ಪೀಕಿನೆನ್ಸಿಸ್
ಹೋಮೊ ಎರೆಕ್ಟಸ್
ಮೋಜೊಕೆರ್ಟೆನ್ಸಿಸ್
ಹೋಮೊ ಹ್ಯಾಬಿಲಿಸ್
ರಾಮಪಿತೆಕಸ್
ಪ್ಲೈಯೊಸೀನ್
70,00,000 ವರ್ಷಗಳು
ಡ್ರೈಯೊಪಿತೆಕಸ್
ಓರಿಯೊಪಿತೆಕಸ್
ಮೈಯೊಸೀನ್
2,60,00,000 ವರ್ಷಗಳು
ಪ್ರೋಕಾನ್ಸುಲ್

## ಇತಿಹಾಸ ಕಾಣದ ಕಾಲದಲ್ಲಿ

ಸುಮಾರು 500 ಕೋಟಿ ವರ್ಷಗಳ ಹಿಂದೆ ಭೂಮಿ ಮೈದಳೆಯಿತು. ಅಲ್ಲಿಂದ ಸುಮಾರು 350 ಕೋಟಿ ವರ್ಷಗಳು ಕಳೆದ ಬಳಿಕ ಅದರ ಮೇಲೆ ಜೀವಿಗಳು ಬದುಕಲು ಅನುಕೂಲ ಪರಿಸ್ಥಿತಿ ಒದಗಿತು. ಇಂದಿಗೆ ಸುಮಾರು 45 ಕೋಟಿ ವರ್ಷಗಳ ಹಿಂದೆ ನೆಲ ಭಾಗದ ಮೇಲೆ ಸಸ್ಯಗಳು ಹಬ್ಬತೊಡಗಿದುವು. ಇದಾಗಿ 10 ಕೋಟಿ ವರ್ಷಗಳ ತರುವಾಯ ನೀರಲ್ಲೂ ನೆಲದಲ್ಲೂ ವಾಸಿಸಬಲ್ಲ **ಉಭಯಚರಿ**ಗಳೆಂಬ ಪ್ರಾಣಿಗಳು ಕಂಡುಬಂದುವು. ಬೆನ್ನೆಲುಬು ಇರುವ (**ಕಶೇರುಕ**ಗಳು) ಮತ್ತು ಮೊಟ್ಟೆ ಇಡುವ ಗೌಳಿಗಳು ಈಗ್ಗೆ 30 ಕೋಟಿ ವರ್ಷಗಳ ಹಿಂದೆ ಕಾಣಿಸಿಕೊಂಡುವು. ಸುಮಾರು 7 ಕೋಟಿ ವರ್ಷಗಳ ಹಿಂದೆ **ಸ್ತನಿ**ಗಳೆಂಬ (ಸ್ತನ, ಎಂದರೆ ಮೊಲೆ, ಇರುವವು) ಪ್ರಾಣಿಗಳು ಗೌಳಿಗಳಿಂದ ವಿಕಾಸಗೊಂಡುವು. ಇವು ಮರಿ ಹಾಕುತ್ತಿದ್ದುವು ಮತ್ತು ಅವುಗಳಿಗೆ ಮೊಲೆ ಊಡುತ್ತಿದ್ದುವು. ಸ್ತನಿಗಳಲ್ಲಿ ಇದ್ದ ಬಗೆಗಳು ಅನೇಕ. ಇಂದು ನಾವು ಕಾಣುವ ಹಸು, ಹಂದಿ, ಸಿಂಹ, ಕುದುರೆಗಳ ಪೂರ್ವಜ ಪ್ರಾಣಿಗಳನ್ನು ಅಂದು ಕಾಣಬಹುದಾಗಿತ್ತು. ಕಾಡಿನಲ್ಲಿ ಬದುಕುತ್ತಿದ್ದ ಸ್ತನಿಗಳ ಪೈಕಿ ಕೆಲವು ಮರ ಏರಲು ಕಲಿತುವು. ಆಗ ಅವುಗಳಿಗೆ ಕೊಂಬೆಗಳಿಂದ ಜೋತಾಡುವುದು ಅವಶ್ಯವಾಯಿತು. ಹೀಗಾಗಿ ಮುಂದಿನ ಎರಡು ಕಾಲುಗಳಿಗೆ ಹೆಚ್ಚು ಕೆಲಸ ಬಿತ್ತು. ಅವನ್ನು ಸುಲಭವಾಗಿ ಚಲಿಸುವುದು ಸಾಧ್ಯವಾಯಿತು. ಆ ಜೀವಿಗಳ ಚಪ್ಪಟೆ ಕೈ ಕಾಲುಗಳಲ್ಲಿ ಉಗುರುಗಳಿಂದ ಕೂಡಿದ ಬೆರಳುಗಳಿದ್ದುವು. ಬೆರಳುಗಳನ್ನು ಚಲಿಸಿ ವಸ್ತುಗಳನ್ನು ಹಿಡಿಯುವುದು ರೂಢಿಯಾಯಿತು. ಇಂಥ ಪ್ರಾಣಿಗಳಿಗೆ ಬದುಕನ್ನು ಸಾಗಿಸಲು ಹೆಚ್ಚು ಬುದ್ಧಿ ಮತ್ತು ಚುರುಕುತನ ಬೇಕಾದುವು. ಇವನ್ನು ಒದಗಿಸುವುದಕ್ಕೋ ಎಂಬಂತೆ ಮಿದುಳಿನ ಗಾತ್ರ ದೊಡ್ಡದಾಯಿತು. 4 ಕೋಟಿ ವರ್ಷಗಳ ಹಿಂದೆ ಇಂಥ ಪ್ರಾಣಿಗಳು ಬದುಕಿದ್ದುವು. ಇವು ಪ್ರಮುಖ ಸ್ತನಿಗಳು. ವಾನರರಿಗೂ ಮನುಷ್ಯರಿಗೂ ಪೂರ್ವಜರಾದ ಪ್ರಾಣಿಗಳನ್ನು ಇವುಗಳಲ್ಲಿ ಕಾಣಬಹುದು.





## ಅಡವಿಯಿಂದ ಬಯಲಿನೆಡೆಗೆ

ಕಾಡಿನಲ್ಲೇ ದಿನಗಳೆಯುತ್ತಿದ್ದ ಪ್ರಮುಖ ಸ್ತನಿಗಳ ಗುಂಪಿನಿಂದ ಮುಂದೆ ಕೋತಿಗಳೂ ವಾನರಗಳೂ ವಿಕಸಿಸಿದುವು. ಬಾಲವಿಲ್ಲದ ಪ್ರಮುಖ ಸ್ತನಿಗಳ ಗುಂಪೊಂದು ಅಡವಿಯನ್ನು ತೊರೆದು ಉಣಿಸನ್ನು ಅರಸುತ್ತ ಬಯಲಿನಲ್ಲಿ ಮುಂದೆ ಮುಂದೆ ಸಾಗಿರಬಹುದು. ಈ ಪ್ರಾಣಿಗಳು ನೆಲದ ಮೇಲೆ ಎರಡು ಕಾಲುಗಳಿಂದ ನಡೆಯತೊಡಗಿದುವು. ಆಗ ಮುಂಗಾಲುಗಳು ನಡೆಯುವ ಕೆಲಸದಿಂದ ಬಿಡುಗಡೆಗೊಂಡು ಕೈಗಳಾಗಿ ಮಾರ್ಪಟ್ಟು ಉಪಯುಕ್ತವಾದ ಇತರ ಕೆಲಸಗಳನ್ನು ಮಾಡಲು ಒದಗಿದುವು. 140 ಲಕ್ಷ ವರ್ಷಗಳ ಹಿಂದೆ ಇದ್ದ ಇಂಥ ಪ್ರಮುಖ ಸ್ತನಿಯ ಅವಶೇಷ ನಮ್ಮ ದೇಶದ ಸಿವಾಲಿಕ್ ಬೆಟ್ಟಗಳಲ್ಲಿ ದೊರೆತಿದೆ. ಆ ಪ್ರಾಣಿ ನೆಟ್ಟಗೆ ನಡೆಯುತ್ತಿತ್ತು. ಅದರ ದವಡೆ ಮುಂಚಾಚಿರಲಿಲ್ಲ. ಅದು ಕಲ್ಲು, ಕೋಲುಗಳನ್ನು ಕೈಯಲ್ಲಿ ಹಿಡಿಯಬಲ್ಲುದಾಗಿತ್ತು. ಬೇರೆ ಪ್ರಾಣಿಗಳಿಂದ ತನ್ನನ್ನು ಕಾಪಾಡಿಕೊಳ್ಳಲು ಪ್ರಯತ್ನಿಸುತ್ತಿತ್ತು. ಮನುಷ್ಯನಿಗೆ ಪೂರ್ವಜವಾದ ಪ್ರಾಣಿ ಇದು. ಆದರೆ ಇದಕ್ಕೆ ಮನುಷ್ಯನಿಗಿಂತಲೂ ವಾನರಗಳೊಂದಿಗೆ ಹೆಚ್ಚು ಹೋಲಿಕೆ. ಆದ್ದರಿಂದ ಇದನ್ನು **ರಾಮಪಿತೆಕಸ್** ಎಂದು ಕರೆದಿದ್ದಾರೆ (ಪಿತೆಕಸ್ ಎಂದರೆ ವಾನರ).

ಆಫ್ರಿಕದ ಕೀನ್ಯದಲ್ಲಿ ದೊರೆತ ತಲೆಬುರುಡೆ





ರಾಮಪಿತೆಕಸಿನ ಮೇಲು ಮತ್ತು ಕೆಳದವಡೆಗಳನ್ನು ಆಧರಿಸಿ ರಚಿಸಿದ ಪೂರ್ತಿ ಕಪಾಲ



● ಆಸ್ಟ್ರಲೊಪಿತೆಕಸ್ ದೊರೆತ ಪ್ರದೇಶಗಳು

ಇಂದಿನ ಚಿಂಪ್ಯಾಂಜಿಗಳು ಹರಡಿದ್ದ ಪ್ರದೇಶ

ಗೊರಿಲಗಳು ಹರಡಿದ್ದ ಪ್ರದೇಶಗಳು

ರಾಮಪಿತೆಕಸ್‌ಗಿಂತ ಹೆಚ್ಚು ವಿಕಾಸ ಹೊಂದಿದ ಪ್ರಾಣಿಯ ಅವಶೇಷಗಳು ದಕ್ಷಿಣ ಆಫ್ರಿಕದಲ್ಲಿ ಸಿಕ್ಕಿವೆ. ಇದು 50 ಲಕ್ಷ ವರ್ಷಗಳ ಹಿಂದೆ ಬದುಕಿದ್ದಿರಬಹುದು. ಈ ಪ್ರಾಣಿ ನೆಟ್ಟಗೆ ನಡೆಯುತ್ತಿತ್ತು. ಇದರ ಮಿದುಳು (450 ರಿಂದ 660 ಘನ ಸೆಂಟಿಮೀಟರ್) ಈಗಿನ ವಾನರನ ಮಿದುಳಿಗಿಂತ ದೊಡ್ಡದಿರಲಿಲ್ಲ. ಪ್ರಾಣಿಗಳನ್ನು ತಿಂದ ಮೇಲೆ ಉಳಿದ ಎಲುಬುಗಳನ್ನೂ ತಾನಾಗಿ ಒದಗಿದ ಹರಿತ ಕಲ್ಲುಗಳನ್ನೂ ಇದು ಇತರ ಕೆಲಸಗಳಿಗೆ ಉಪಯೋಗಿಸುತ್ತಿತ್ತು. ಮನುಷ್ಯನನ್ನು ಹೆಚ್ಚು ಹೋಲುತ್ತಿದ್ದ ಈ ನರವಾನರನನ್ನು **ಆಸ್ಟ್ರಲೊಪಿತೆಕಸ್** (ದಾಕ್ಷಿಣಾತ್ಯ ವಾನರ) ಎಂದು ಕರೆದಿರುವರು.

25 ಲಕ್ಷ ವರ್ಷಗಳ ಹಿಂದೆ ಬದುಕಿದ್ದ ಮನುಷ್ಯನ ಪೂರ್ವಜನ ತಲೆಬುರುಡೆ ಮತ್ತು ಎಲುಬುಗಳು ಕೀನ್ಯ ದೇಶದಲ್ಲಿ ದೊರೆತಿವೆ. ಇವನ ಮಿದುಳಿನ ಗಾತ್ರ 800 ಘನ ಸೆಂಟಿಮೀಟರ್. ಆಸ್ಟ್ರಲೊಪಿತೆಕಸ್ ನರವಾನರನ ಮಿದುಳಿಗಿಂತ ಇದು ಗಾತ್ರದಲ್ಲಿ ದೊಡ್ಡದು. ಆದರೆ ಇಂದಿನ ಮನುಷ್ಯನ ಮಿದುಳಿನ ಗಾತ್ರಕ್ಕಿಂತ (1,500 ಘನ ಸೆಂಟಿಮೀಟರ್) ಚಿಕ್ಕದು. ಇವನ ಎತ್ತರ ಸುಮಾರು 150 ಸೆಂಮೀ ಮತ್ತು ನಿಲುವು ನೇರ. ಸಹಜವಾಗಿ ಸಿಗುವ ಕಲ್ಲನ್ನು ಈತ ಆಯುತ್ತಿದ್ದ. ಒಂದು ಕಲ್ಲಿನಿಂದ ಮತ್ತೊಂದು ಕಲ್ಲನ್ನು ಬಡಿದು ಚಕ್ಕೆ ತೆಗೆದು ಹರಿತ ಅಂಚಿನ ಹತ್ಯಾರುಗಳನ್ನು ಪಡೆಯುತ್ತಿದ್ದ. ಹತ್ಯಾರು ತಯಾರಿಸುವ ಮನುಷ್ಯನ ಮುಖ್ಯ ಗುಣ ಆರಂಭವಾದ್ದು ಇಲ್ಲಿಂದ. ಈ ಮನುಷ್ಯ ಹಣ್ಣು ಹಂಪಲುಗಳ ಜೊತೆಗೆ ಸಣ್ಣ ಪ್ರಾಣಿಗಳನ್ನೂ ಹಿಡಿದು ತಿನ್ನುತ್ತಿದ್ದ. ಪ್ರಾಣಿಗಳ ಮಾಂಸವನ್ನು ಹಲ್ಲುಗಳಿಂದ ಕಡಿಯುವ ಮೊದಲು ಕಲ್ಲಿನ ಹತ್ಯಾರುಗಳಿಂದ ಕತ್ತರಿಸುತ್ತಿದ್ದ.



## ನೆಟ್ಟನೆಯ ನಡೆಯಾಗೆ ದಿಟ್ಟನೆಯ ನಿಲುವಾಗೆ

ಸುಮಾರು 5 ಲಕ್ಷ ವರ್ಷಗಳ ಹಿಂದೆ ಭೂಮಿಯಲ್ಲಿ ಮತ್ತೊಂದು ಮನುಷ್ಯ ಪ್ರಭೇದ ಕಂಡುಬಂತು. ಅದು **ನೆಟ್ಟಗಿನ ಮನುಷ್ಯ**ನದು. ಮನುಷ್ಯ ಜಾತಿಯ ಕವಲಿನಲ್ಲಿ ಕಾಣಿಸಿಕೊಂಡ ಸ್ಪಷ್ಟ ಪ್ರಭೇದಗಳ ಪೈಕಿ ಇದು ಮೊದಲನೆಯದು. ಏಷ್ಯ, ಆಫ್ರಿಕ, ಯೂರೋಪ್ ಖಂಡಗಳಲ್ಲಿ ಈ ಬಗೆಯ ಮನುಷ್ಯರು ಹರಡಿದ್ದರು. ಜಾವಾದಲ್ಲೂ ಚೀನದಲ್ಲೂ ಇವರ ಅವಶೇಷಗಳು ದೊರೆತಿವೆ. ನೆಟ್ಟಗಿನ ಮನುಷ್ಯನ ಲಕ್ಷಣಗಳೇನು ? ತಗ್ಗಾದ ಹಣೆ, ಮುಂಚಾಚಿದ ಹುಬ್ಬು, ಹಿರಿಗಾತ್ರದ ಹಲ್ಲುಗಳು. ಅವನ ಮಿದುಳಿನ ಗಾತ್ರ, ಸುಮಾರು 1,000 ಘನ ಸೆಂಮೀ ನಷ್ಟಿತ್ತು. ಕುರಿ, ಜಿಂಕೆ, ಆನೆ, ಖಡ್ಗ ಮೃಗಗಳಂಥ ಸಣ್ಣ ದೊಡ್ಡ ಪ್ರಾಣಿಗಳನ್ನು ಅವನು ಬೇಟೆ ಆಡುತ್ತಿದ್ದ. ಇದಕ್ಕಾಗಿ ಅವನು ತನ್ನಂತೆಯೇ ಇರುವ ಇತರ ಮನುಷ್ಯರೊಡನೆ ಸೇರಬೇಕಾಗುತ್ತಿತ್ತು. ಆಗ ತಂಡದಲ್ಲಿ ಕೆಲಸ ಮಾಡುವುದನ್ನೂ ಬದುಕುವುದನ್ನೂ ಕಲಿಯುವುದು ಅಗತ್ಯವೆನಿಸಿತು. ತನ್ನ ಅಭಿಪ್ರಾಯಗಳನ್ನು ಇತರರಿಗೆ ತಿಳಿಸುವುದು ಅವಶ್ಯವಾಯಿತು. ಆಗಲೇ ಅವನು ಅನಿವಾರ್ಯವಾಗಿ ಮಾತಾಡಲು ಆರಂಭಿಸಿದ. ವಾನರರಿಗಿಲ್ಲದ ವಾಕ್ ಕೇಂದ್ರ ಮನುಷ್ಯನ ಮಿದುಳಿನಲ್ಲಿ ವಿಕಾಸಗೊಂಡಿತು.



ಕಲ್ಲಿನಿಂದ ಕಲ್ಲಿಗೆ ಬಡಿಯುವಾಗಲೊ ಮಿಂಚು ಬಡಿದು ಕಾಡು ಹೊತ್ತಿಕೊಳ್ಳುವಾಗಲೊ ಬೆಂಕಿ ಉಂಟಾಗುವುದನ್ನು ಮನುಷ್ಯ ನೋಡಿದ್ದ. ಬೆಂಕಿ ಎಂದರೆ ಬಿಸಿಯ ಸಂಕೇತ, ಚಳಿಯನ್ನು ಹೊಡೆದೋಡಿಸುವ ಸಾಧನ. ಇದನ್ನು ಗಮನಿಸಿದ ಮನುಷ್ಯ ಬೆಂಕಿ ಉರಿಸಿ ಬೆಚ್ಚಗಿರಲು ಕಲಿತ. ಬೆಂಕಿಯಲ್ಲಿ ಬೆಂದ ಆಹಾರದ ರುಚಿ ಅವನಿಗೆ ಗೊತ್ತಾಯಿತು. ರುಚಿಗಾಗಿ ಆಹಾರವನ್ನು ಬೇಯಿಸಿದ. ಬೆಂದ ಆಹಾರ ಸಿಗುವಾಗ ಹಲ್ಲುಗಳ ಕೆಲಸ ಹಗುರಾಯಿತು. ಹೀಗೆ ಹಲ್ಲು, ದವಡೆಗಳ ಗಾತ್ರ ಕ್ರಮೇಣ ಚಿಕ್ಕದಾಯಿತು.

ಕರ್ನಾಟಕದಲ್ಲಿ ದೊರಕಿದ ಆಯುಧಗಳು



ಈ ಪ್ರಭೇದದ ಮನುಷ್ಯರು ಕಲ್ಲಿನಿಂದ ಕೈ ಕೊಡಲಿ ತಯಾರಿಸಿದರು. ಬೇಟೆ ಆಡಿದ ಪ್ರಾಣಿಗಳ ಚರ್ಮ ಸುಲಿಯಲೂ ಮಾಂಸವನ್ನು ಕತ್ತರಿಸಲೂ ಇದರಿಂದ ಅನುಕೂಲವಾಯಿತು. ಈ ಜನರೇ ಬಹುಶಃ ವಾಸಿಸಲು ಮೊತ್ತಮೊದಲ ಗುಡಿಸಲುಗಳನ್ನು ಕಟ್ಟಿರಬಹುದು. ಮರದ ಕೊಂಬೆಗಳಿಂದ ಸೂರನ್ನು ಕಟ್ಟಿ ನೆಲಕ್ಕೆ ಕಲ್ಲಿನ ಚಪ್ಪಡಿಗಳನ್ನೂ ಚರ್ಮವನ್ನೂ ಹೊದೆಸಿದರು.

ಇನ್ನೂ ಹೆಚ್ಚು ವಿಕಾಸ ಹೊಂದಿದ ಮನುಷ್ಯರು ಸುಮಾರು 2.5 ಲಕ್ಷ ವರ್ಷಗಳ ಹಿಂದೆ ಯೂರೋಪಿನಲ್ಲಿ ಕಾಣಿಸಿಕೊಂಡರು. ಇವರು ಜಿಂಕೆಗಳನ್ನು ಬೇಟೆ ಆಡುತ್ತಿದ್ದರು. ಇಂಗ್ಲೆಂಡಿನ ಸ್ವಾನ್ಸ್‌ಕೊಂಬಿನಲ್ಲಿ ಸಿಕ್ಕಿದ ತಲೆಬುರುಡೆ ಇಂಥ ಒಬ್ಬ ಮನುಷ್ಯನದು. ಇವರು ನೆಟ್ಟಗಿನ ಮನುಷ್ಯನಿಗಿಂತಲೂ ಹೆಚ್ಚಾಗಿ ಆಧುನಿಕ ಮನುಷ್ಯನನ್ನು ಹೋಲುತ್ತಿದ್ದರು.

## ಹೋರಾಟದ ಬದುಕು

ಸುಮಾರು 70 ಸಾವಿರ ವರ್ಷಗಳ ಹಿಂದೆ ಬದುಕಿದ್ದ ಮನುಷ್ಯ ಪ್ರಭೇದದ ಕುರುಹುಗಳು ಜರ್ಮನಿಯ ನಿಯಾಂಡರ್ ಕಣಿವೆಯಲ್ಲಿ ಸಿಕ್ಕಿವೆ. **ನಿಯಾಂಡರ್ತಲ್ ಮನುಷ್ಯ**ರೆಂಬ ಹೆಸರಿನ ಈ ಮನುಷ್ಯರು ಕಾಣಿಸಿಕೊಂಡ ಬಳಿಕ ಮುಂದಿನ ಸುಮಾರು 40 ಸಾವಿರ ವರ್ಷಗಳ ತನಕ ಅವರು ಯೂರೋಪ್, ಏಷ್ಯಗಳಲ್ಲಿ ಹರಡಿದರು. ಇಂಥದೇ ಜನ ಆಫ್ರಿಕ ಖಂಡದಲ್ಲೂ ಇದ್ದರು. ಇವರ ಮಿದುಳು ಇಂದಿನ ಮನುಷ್ಯನದ್ದಕ್ಕಿಂತ ಸ್ವಲ್ಪ ದೊಡ್ಡದೇ ಆಗಿತ್ತು. ಇವರ ವಾಸಸ್ಥಾನಗಳು ನೈಸರ್ಗಿಕವಾಗಿ ಲಭಿಸುತ್ತಿದ್ದ ಗವಿಗಳು.ಆಹಾರಕ್ಕಾಗಿ ಇವರು ಹಿಮಸಾರಂಗಗಳ ಗುಂಪನ್ನು ಬೆನ್ನಟ್ಟಿ ಬೇಟೆ ಆಡುತ್ತಿದ್ದರು. ಜಾನುವಾರುಗಳನ್ನೂ ಕಾಡುಕೋಣಗಳನ್ನೂ ಕೊಂದು ತಿನ್ನುತ್ತಿದ್ದರು. ಪ್ರಾಣಿ ಚರ್ಮಗಳನ್ನು ಕಲ್ಲಿನ ಕೀಸುಳಿಯಿಂದ ಸ್ವಚ್ಛಮಾಡಿ ಹೊದೆಯಲು ಅಥವಾ ಉಡಲು ಬಳಸುತ್ತಿದ್ದರು. ಒಳ್ಳೆ ಜಾತಿಯ ಕಲ್ಲನ್ನು ಹುಡುಕಿ ಈಟಿಯ ಮೊನೆ, ಕೈಕೊಡಲಿಗಳನ್ನು ತಯಾರಿಸಿದ್ದರು. ಒಂದು ಬದಿ ದಪ್ಪ ಮತ್ತು ಇನ್ನೊಂದು ಬದಿ ಹರಿತ




ಯೂರೋಪಿಯನ್


ಮಂಗೊಲಾಯ್ಡ್


ಆಸ್ಟ್ರಲಾಯ್ಡ್


ನೀಗ್ರಾಯ್ಡ್

ವಾಗಿರುವ ಕಲ್ಲಿನ ಚಾಕುವನ್ನೂ ಗರಗಸದಂಥ ಹಲ್ಲುಗಳಿರುವ ಕಲ್ಲಿನ ಚಕ್ಕೆಯನ್ನೂ ಇವರು ನಿರ್ಮಿಸಿದ್ದರು. ಸತ್ತವರನ್ನು ಹೂಳುವ ಕ್ರಮ ಇವರಲ್ಲಿತ್ತು. ಹಾಗೆ ಹೂಳುವಾಗ ಶವದೊಂದಿಗೆ ಹತ್ಯಾರುಗಳನ್ನೂ ಇಡುತ್ತಿದ್ದರು. ಸತ್ತ ಮೇಲೂ ಮನುಷ್ಯನಿಗೆ ಅವು ಬೇಕಾಗಬಹುದೆಂಬುದು ಅವರ ಯೋಚನೆಯಾಗಿದ್ದಿರಬಹುದು. ಸಾವಿನ ಅನಂತರದ ಅವಸ್ಥೆಯ ಬಗ್ಗೆ ಅವರು ಚಿಂತಿಸಿದ್ದರು ಎಂದು ಇದರಿಂದ ತಿಳಿಯುತ್ತದೆ.

ನಿಯಾಂಡರ್ತಲ್ ಜನರಲ್ಲಿ ಸಾಕಷ್ಟು ಹಿಂಸಾ ಪ್ರವೃತ್ತಿಯಿತ್ತು. ಅವರು ಪರಸ್ಪರ ಹೊಡೆದಾಡಿ ಒಬ್ಬರನ್ನೊಬ್ಬರು ಕೊಲ್ಲುತ್ತಿದ್ದುದುಂಟು. ಸುಮಾರು 35 ಸಾವಿರ ವರ್ಷಗಳ ಹಿಂದೆ ನಿಯಾಂಡರ್ತಲ್ ಜನ ಇಲ್ಲವಾದರು. ಅನಂತರ ಬಂದ ಜನರೊಡನೆ ಅವರು ಬೆರೆತು ಹೋಗಿರಬಹುದು. ಇಲ್ಲವೇ ಅತಿ ಶೀತ ಹವೆಯನ್ನು ತಾಳಲಾರದೆ ನಾಶವಾಗಿರಬಹುದು.















## ಆಧುನಿಕ ಮನುಷ್ಯನ ಅವತಾರ

ನಿಯಾಂಡರ್ತಲ್ ಮನುಷ್ಯ ಕಾಣದಾಗುತ್ತಿದ್ದಂತೆ ಆಧುನಿಕ ಮನುಷ್ಯ ಪ್ರಭೇದದವರು ಕಾಣಿಸಿಕೊಂಡರು. ದೈಹಿಕವಾಗಿ ಇವರಿಗೂ ಇಂದಿನ ನಮಗೂ ಅಂಥ ವ್ಯತ್ಯಾಸವೇನೂ ಇಲ್ಲ. ಯೋಚಿಸುವ ಸಾಮರ್ಥ್ಯ ಹೆಚ್ಚಿಗೆ ಇದ್ದ ಈತ 'ವಿವೇಕಿ ಮನುಷ್ಯ'. ಇವನ ಪ್ರಭೇದವೂ 'ವಿವೇಕಿ', ಉಪಪ್ರಭೇದವೂ 'ವಿವೇಕಿ'. ಎಂತಲೇ ಇವನನ್ನು **ವಿವೇಕಿ ವಿವೇಕಿ ಮನುಷ್ಯ** ಎನ್ನುವುದುಂಟು. ಇಂಥ ಮನುಷ್ಯನ ಅವಶೇಷಗಳು ಮೊದಲು ದೊರಕಿದ್ದು ಫ್ರಾನ್ಸ್ ದೇಶದ ಕ್ರೋಮ್ಯಾಗ್‌ನಾನ್ ಎಂಬ ಗವಿಯಲ್ಲಿ. (ಕ್ರೋಮ್ಯಾಗ್‌ನಾನ್ ಎಂದರೆ ದೊಡ್ಡ ಬಿಲ ಎಂದು ಅರ್ಥ.) ಆದ್ದರಿಂದ ಈ ಮಂದಿಯನ್ನು **ಕ್ರೋಮ್ಯಾಗ್‌ನಾನ್** ಜನ ಎನ್ನುವುದೂ ಉಂಟು. ಈ ಪ್ರಭೇದದ ಮನುಷ್ಯರು ಪ್ರಪಂಚದ ಎಲ್ಲೆಡೆಗಳಿಗೂ ಹರಡಿದರು. ಕಾಲ ಕಳೆದಂತೆ ಅಲ್ಲಲ್ಲಿನ ಹವೆ ಮತ್ತು ಪರಿಸರಗಳಿಂದಾಗಿ ಇವರ ದೈಹಿಕ ಲಕ್ಷಣ, ಮೈ ಬಣ್ಣಗಳು ಬದಲಾಗಿ ಬೇರೆ ಬೇರೆ ವರ್ಣಗಳ ಜನ ಎಂಬ ವ್ಯತ್ಯಾಸಗಳು ಉಂಟಾದುವು.



ಕ್ರೋಮ್ಯಾಗ್‌ನಾನ್ ಮನುಷ್ಯ ಕಲ್ಲಿನ ವಿವಿಧ ಹತ್ಯಾರು ತಯಾರಿಸುವ ಚತುರ ಕೆಲಸಗಾರನಾಗಿದ್ದ. ಕಲ್ಲಷ್ಟೇ ಅಲ್ಲದೆ ಮರ, ಎಲುಬು, ಜಿಂಕೆಯ ಕೊಂಬು ಗಳನ್ನೂ ಹತ್ಯಾರು ತಯಾರಿಕೆಗೆ ಬಳಸಿದ. ಈಟಿಯ ಮೊನೆ, ಸೂಜಿಗಳನ್ನು ಕೂಡ ತಯಾರಿಸಿದ. ಆದರೆ ಇವು ಯಾವುವೂ ಇಂದಿನವಷ್ಟು ನಾಜೂಕಾಗಿರಲಿಲ್ಲ. ಇವನು ದೂರದ ಕೊಳ್ಳೆ ಹಿಡಿಯಲು ಈಟಿಯನ್ನು ಗುರಿ ಎಸೆಯ ಬಲ್ಲವನಾಗಿದ್ದ. ಚರ್ಮವನ್ನು ಹೊಲಿದು ಉಡುಗೆ ತಯಾರಿಸುತ್ತಿದ್ದ. ಚಿಪ್ಪು ಮತ್ತು ಪ್ರಾಣಿಗಳ ಹಲ್ಲುಗಳನ್ನು ಅಲಂಕಾರಕ್ಕಾಗಿ ಉಪಯೋಗಿಸುತ್ತಿದ್ದ. ಹಿಮಸಾರಂಗ ಮತ್ತು ಮ್ಯಾಮತ್ ಆನೆಗಳನ್ನು ಬೇಟೆ ಆಡುತ್ತಿದ್ದ. ಪ್ರಾಣಿಗಳ ಗುಂಪನ್ನು ಓಡಿಸಿ ಎತ್ತರವಾದ ಪರ್ವತ ಶ್ರೇಣಿಯಿಂದ ತಳ್ಳಿ ಬೀಳಿಸಿ ಸಾಯಿಸುತ್ತಿದ್ದ. ಪ್ರಾಣಿ ಕೊಬ್ಬನ್ನು ದೀಪ ಹಚ್ಚಲು ಉರುವಲಾಗಿ ಬಳಸುತ್ತಿದ್ದ. ಆನೆಯ ದಂತ ಇಲ್ಲವೇ ಮರದ ಕೊಂಬೆಗಳನ್ನು ನೆಟ್ಟು ಪ್ರಾಣಿ ಚರ್ಮಗಳನ್ನು ಹಾಸಿ ಡೇರೆ ಎಬ್ಬಿಸುತ್ತಿದ್ದ.

ಸುಮಾರು 10–15 ಸಾವಿರ ವರ್ಷಗಳ ಹಿಂದೆ ಭೂಮಿಯ ಉತ್ತರ ಭಾಗದಲ್ಲಿ ಹರಡಿದ್ದ ಹಿಮ ಕರಗ ಲಾರಂಭಿಸಿತು. ಬೆಚ್ಚಗಿನ ಹವೆ ಬಂದಂತೆ ಜನರಿಗೆ ಗವಿ ಬಿಟ್ಟು ಇಚ್ಛೆ ಬಂದಂತೆ ಹೊರಗೆ ಅಲೆಯುವುದು ಸಾಧ್ಯವಾಯಿತು.

### ಕಲೆಯ ಸೆಲೆ

ಆಸ್ಟ್ರಿಯ ದೇಶದಲ್ಲಿ ಈ 'ವಿವೇಕ ಮನುಷ್ಯರು' 30 ಸಾವಿರ ವರ್ಷಗಳ ಹಿಂದೆ ಸುಣ್ಣದ ಕಲ್ಲಿನಲ್ಲಿ ಕೆತ್ತಿದ ಹೆಂಗಸಿನ ಆಕೃತಿ ಸಿಕ್ಕಿದೆ. ಫ್ರಾನ್ಸ್ ದೇಶದಲ್ಲಿರುವ ಗುಹೆಯ ಗೋಡೆಯಲ್ಲಿ 15 ಸಾವಿರ ವರ್ಷಗಳ ಹಿಂದೆ ಬರೆದ ಚಿತ್ರಗಳಿವೆ. ಈ ಮನುಷ್ಯರು ದಂತದಲ್ಲೊ ಮಣ್ಣಿನಲ್ಲೊ ಶಿಲ್ಪ ತಯಾರಿಸಿದರು. ಗುಹೆಯ ಗೋಡೆಗಳಲ್ಲಿ ಚಿತ್ರ ಬರೆದರು. ತಮಗೆ ಹೆಚ್ಚು ಪರಿಚಿತವಾದ ಪ್ರಾಣಿಗಳನ್ನೂ ಅವುಗಳ ಬೇಟೆಯನ್ನೂ ಚಿತ್ರಿಸಿದರು. ಬೇರೆ ಬೇರೆ ಬಣ್ಣಗಳ ಮಣ್ಣುಗಳಿಂದ ಚಿತ್ರಗಳಿಗೆ ಬಣ್ಣ ಕೊಟ್ಟರು. ಹೀಗೆ ತಮ್ಮ ಮನಸ್ಸಿನ ಭಾವನೆಗಳಿಗೆ ತಕ್ಕ ರೂಪ ಕೊಡಲು ಯತ್ನಿಸಿದರು.



**ಉಣಿಸಿಗಾಗಿ ಅಲೆತ**

ಮನುಷ್ಯ ಬೇಟೆ ಆಡಲು ಈಟಿಯೊಂದನ್ನೇ ಅಲ್ಲದೆ ಬಿಲ್ಲು ಬಾಣಗಳನ್ನೂ ತಯಾರಿಸಿದ. ಇವನು ಬರಿ ಮಾಂಸಾಹಾರಿ ಆಗಿರಲಿಲ್ಲ. ಗಡ್ಡೆಗೆಣಸು ಹಣ್ಣು ಜೇನುಗಳನ್ನು ಸಂಗ್ರಹಿಸಿ ತಿನ್ನುತ್ತಿದ್ದ ಕೂಡ. ಇವನಿಗೆ ಇಡೀ ವರ್ಷ ಒಂದೇ ಎಡೆ ಮಾಂಸಾಹಾರವಾಗಲಿ ಸಸ್ಯಾಹಾರವಾಗಲಿ ಒದಗುತ್ತಿರಲಿಲ್ಲ. ಆದ್ದರಿಂದ ಇವನು ಆಹಾರಕ್ಕಾಗಿ ಒಂದು ನೆಲೆಯಿಂದ ಇನ್ನೊಂದು ನೆಲೆಗೆ ಅಲೆದಾಡುತ್ತಿದ್ದ. ಮತ್ತೆ ಮೊದಲಿನ ಜಾಗಗಳಿಗೆ ಬರುತ್ತಿದ್ದ. ಬೇಟೆ ಆಡುವಾಗ ಅಪಘಾತಗಳಾಗುತ್ತಿದ್ದುವು. ರೋಗರುಜಿನಗಳು ಅಂದಿಗೂ ಇದ್ದುವು. ಇದರಿಂದ ಆ ಕಾಲದ ಮನುಷ್ಯನ ಆಯುಸ್ಸು ಕಡಿಮೆಯಾಯಿತು.

ಕಾಡುಗಳಲ್ಲಿ ಪ್ರಾಣಿಗಳು ಸಿಗದಾಗ ಮನುಷ್ಯರ ಕೆಲವು ತಂಡಗಳು ನದಿ ಸರೋವರಗಳ ಬದಿಗಳಲ್ಲಿ ಬೀಡು ಬಿಟ್ಟುವು. ನೀರಿನ ಆಸರೆ ಇರುವಲ್ಲಿ ಇವರಿಗೆ ಮೀನು ಮತ್ತು ನೀರ ಹಕ್ಕಿಗಳು ಸಿಗುತ್ತಿದ್ದುವು. ಇವರ ಪೈಕಿ ಒಬ್ಬ ನೀರ ಮೇಲೆ ಹೋಗಿ ಮೀನು ಹಿಡಿಯಲು ಮರದ ಬೊಡ್ಡೆಯನ್ನು ತೋಡಿ ದೋಣಿ ಮಾಡಿದ. ಕಲ್ಲು, ಮೂಳೆ ಮತ್ತು ಮರಗಳಿಂದ ಬೇರೆ ಬೇರೆ ಭಾಗಗಳನ್ನು ತಯಾರಿಸಿ ಜೋಡಿಸಿ ಹೊಸ ನಮೂನೆಯ ಈಟಿ, ಗಾಳ, ಬಾಣದ ಮೊನೆಗಳನ್ನು ತಯಾರಿಸಿದ. ಹೀಗೆ ಸುಮಾರು **10** ಸಾವಿರ ವರ್ಷಗಳ ಹಿಂದೆ ನದೀ ತೀರಗಳನ್ನು ಆಶ್ರಯಿಸಿದ ಜನರ ಕೆಲವು ಗುಂಪುಗಳು ಅಲ್ಲೇ ಶಾಶ್ವತವಾಗಿ ನೆಲೆಸಿದುವು. ಬೇಟೆಗೂ ಆತ್ಮರಕ್ಷಣೆಗೂ ಸಹಾಯಕವಾದ ನಾಯಿಗಳನ್ನು ಈ ಜನರು ಸಾಕುತ್ತಿದ್ದರು.



## ಬಿತ್ತಿದ ಬೆಳೆ

ಕಾಡು ಬೆಳೆಯದ ಕೆಲವು ಪ್ರದೇಶಗಳಲ್ಲಿ ಹುಲ್ಲು ಬೆಳೆಯುತ್ತಿತ್ತು. ಅಂಥ ಜಾಗಗಳಲ್ಲಿದ್ದ ಮನುಷ್ಯ ಹುಲ್ಲುಗಳ ಕಾಳುಗಳನ್ನು ಸಂಗ್ರಹಿಸಿ ತಿನ್ನಲಾರಂಭಿಸಿದ. ಅವು ಪುಷ್ಟಿಕರವೆಂದು ತಿಳಿದ. ಅವನ ವಾಸಸ್ಥಳದ ಹತ್ತಿರ ಬಿದ್ದ ಕಾಳುಗಳಿಂದ ಸಸಿಗಳು ಹುಟ್ಟಿದುವು. ಸಡಿಲವಾದ ಮಣ್ಣಿನಲ್ಲಿದ್ದ ಸಸಿಗಳಿಗೆ ಕಶ್ಮಲಗಳು ಒದಗಿದಾಗ ಹೆಚ್ಚು ಕಾಳು ಬೆಳೆಯಿತು. ಇದನ್ನು ಗಮನಿಸಿದ ಮನುಷ್ಯ ಉದ್ದೇಶಪೂರ್ವಕವಾಗಿ ಕಾಳುಗಳನ್ನು ಬೆಳೆಸತೊಡಗಿದ. ಕಾಡುಪ್ರಾಣಿಗಳಿಂದ ಅವನ್ನು ರಕ್ಷಿಸಿದ. ನೀರು ಧಾರಾಳವಾಗಿ ಸಿಗುವ ಜಾಗಗಳಲ್ಲಿ ಮನುಷ್ಯರು ಸುಮಾರು 10–12 ಸಾವಿರ ವರ್ಷಗಳ ಹಿಂದೆ ಈ ತೆರನಾಗಿ ಬೇಸಾಯ ಕೆಲಸದಲ್ಲಿ ನಿರತರಾಗಿದ್ದರು. ಅವರು ಬೆಳೆಸಿದ ಪೈರುಗಳೆಂದರೆ ಗೋದಿ, ಬಾರ್ಲಿ, ಬತ್ತ. ಮಣ್ಣು ಸಡಿಲಿಸಲು ಸಲಾಕಿ, ಪೈರು ಕೊಯ್ಯಲು ಕಲ್ಲಿನ ಕತ್ತಿ, ಕಾಳು ತುಂಬಲು ಬುಟ್ಟಿ ಮತ್ತು ಮಣ್ಣಿನ ಮಡಕೆಗಳನ್ನು ಅವರು ತಯಾರಿಸಿದರು. ಪಳಗಿಸಿ ಸಾಕಿದ ಪ್ರಾಣಿಗಳಿಂದ ಹಾಲು, ಮಾಂಸ, ಉಣ್ಣೆಗಳನ್ನು ಪಡೆದರು.

ಮನುಷ್ಯ ತನಗೆ ಬೇಕಾದ ಪ್ರಾಣಿ ಜಾತಿಗಳನ್ನು ಹೆಚ್ಚು ಹೆಚ್ಚಾಗಿ ಸಾಕಿದ. ತನಗೆ ಇಷ್ಟವಾದ ಹಣ್ಣು ಹಂಪಲು, ತರಕಾರಿ, ಗಡ್ಡೆಗೆಣಸುಗಳನ್ನೂ ಬೆಳೆಸಿದ. ಕಾಡುಗಳನ್ನು ಕಡಿದು, ಬೆಂಕಿ ಕೊಟ್ಟು ಬೇಸಾಯಕ್ಕಾಗಿ ಹೆಚ್ಚು ಜಾಗವನ್ನು ಒದಗಿಸಿದ. ಹೀಗೆ ಬೇಟೆ ಆಡಿ ಬಾಳುತ್ತಿದ್ದ ಮನುಷ್ಯ ಸಸ್ಯ ಮತ್ತು ಪ್ರಾಣಿಗಳನ್ನು ಸಾಕಿ ಬದುಕು ಸಾಗಿಸುವ ಬೇಸಾಯಗಾರನಾದ.



## ನಾಗರಿಕತೆಯ ಹೊನ್ನಗೆರೆ

ವ್ಯವಸಾಯಕ್ಕೆ ಬೇಕಾದ ಹತ್ಯಾರುಗಳನ್ನು ರಚಿಸುವುದೇ ಕೆಲವರ ಕಸಬಾಯಿತು. ಕಲ್ಲು, ಮರಗಳನ್ನು ಕೊರೆದು ಪಾತ್ರೆ ಮಾಡಿದರು. ಸಾಮಾನು ತುಂಬಲು ಚರ್ಮದ ಚೀಲಗಳನ್ನೂ ಹುಲ್ಲಿನ ಬುಟ್ಟಿಗಳನ್ನೂ ಹೆಣೆದರು. ನಾರಿನ ಇಲ್ಲವೇ ಉಣ್ಣೆಯ ಎಳೆಗಳನ್ನು ತಿರುಚಿ, ನೇಯ್ದು ಉಡಲು ಬಟ್ಟೆ ನೇಯ್ದರು. ಸಪಾಟ ಕಲ್ಲನ್ನು ಗೀಟಿಲ್ಲದಂತೆ ನಯ ಮಾಡಿ ಕನ್ನಡಿ ಮಾಡಿಕೊಂಡರು. ಕೈಯಿಂದಲೇ ಆಕಾರ ಕೊಟ್ಟು ಜೇಡಿಮಣ್ಣಿನ ನಾನಾ ಆಕಾರದ ಮಡಕೆ ಕುಡಿಕೆಗಳನ್ನು ತಟ್ಟಿದರು. ಹತ್ಯಾರುಗಳನ್ನು ನಿರ್ಮಿಸಲು ಬೇಕಾದ ಉತ್ತಮ ಜಾತಿಯ ಶಿಲೆಯನ್ನು ನೆಲ ತೋಡಿ ಪಡೆದರು.

ರಾಯಚೂರು ಜಿಲ್ಲೆಯ ಹಿರೆಬೆನೆಕಲ್, ಪ್ರಾಗಿತಿಹಾಸಿಕ ಗವಿಚಿತ್ರ







ಮಡಕೆ ಅಥವಾ ಮಣ್ಣಿನ ಆಕೃತಿಗಳನ್ನು ಮಾಡುತ್ತಿದ್ದವರು ಒಳ್ಳೆ ಜಾತಿಯ ಮಣ್ಣನ್ನು ಹುಡುಕಿದರು. ಅವನ್ನು ಹೆಚ್ಚಿನ ಕಾವಿನಲ್ಲಿ ಸುಡಲು ಒಲೆಗಳನ್ನು ಉಪಯೋಗಿಸಿದರು. ಆಗ ತಾಮ್ರ ಮತ್ತು ಚಿನ್ನದ ಗಟ್ಟಿಗಳು ಸಿಕ್ಕಿದ್ದಿರಬಹುದು. ಬಹಳ ಕಾಸಿದಾಗ ಅವು ಕರಗಿದುವು. ಆ ದ್ರವವನ್ನು ಕಲ್ಲಿನ ಮೇಲೆ ಎರೆದು ಅದಕ್ಕೆ ಬೇಕಾದ ಆಕಾರ ಕೊಟ್ಟರು. ಇದು ಸುಮಾರು 8,000 ವರ್ಷಗಳ ಹಿಂದೆ ನಡೆದಿರಬೇಕೆಂದು ಅಂದಾಜು. ಸುಮಾರು 5,000 ವರ್ಷಗಳ ಹಿಂದೆ ತಾಮ್ರ ಮತ್ತು ತವರವನ್ನು ಮಿಶ್ರ ಮಾಡಿ ಹೆಚ್ಚು ಗಟ್ಟಿಯಾದ ಕಂಚು ಹೊಯ್ದರು. ಸುಮಾರು 4,000 ವರ್ಷಗಳ ಹಿಂದಿನಿಂದ ಹತ್ಯಾರುಗಳ ತಯಾರಿಕೆಗೆ ಕಬ್ಬಿಣವನ್ನು ಉಪಯೋಗಿಸುತ್ತಿರುವುದು ಕಂಡುಬಂದಿದೆ. ಲೋಹಗಳ ಬಳಕೆಯಿಂದ ಬೇಸಾಯದ ಹತ್ಯಾರು, ಸಲಕರಣೆ ಮತ್ತು ಗಾಲಿಗಳು ಉತ್ತಮವಾದುವು.



## ನಾಗರಿಕತೆಯ ತೊಟ್ಟಿಲು

ಫಲವತ್ತಾದ ನದೀ ಬಯಲುಗಳಲ್ಲಿ ಸುಮಾರು 5,000 ವರ್ಷಗಳ ಹಿಂದೆ ಶಾಶ್ವತವಾಗಿ ನೆಲೆಸಿದ ಬೇಸಾಯಗಾರರು ನಗರಗಳನ್ನು ಕಟ್ಟಿದರು. ಎಲ್ಲರೂ ಎಲ್ಲ ಕೆಲಸಗಳನ್ನೂ ಮಾಡುವ ಬದಲು ಕೆಲವು ಜನ ಕೆಲವು ಕೆಲಸಗಳಲ್ಲಿ ನಿರತರಾಗಿ ಇಂಥವುಗಳಲ್ಲಿ ಅವರು ನಿಪುಣರಾದರು. ತಮ್ಮ ಬದುಕು ಮತ್ತು ಚಟುವಟಿಕೆಗಳ ವಿಚಾರ ದಾಖಲೆ ಮಾಡಿ ಮುಂದಿನ ಪೀಳಿಗೆಗಳಿಗೆ ತಿಳಿಯುವಂತೆ ಏರ್ಪಡಿಸಿದರು. ಈ ತೆರನಾದ ನಾಗರಿಕ ಸಮಾಜಗಳು ಮೆಸಪೊಟೇಮಿಯ (ಯೂಫ್ರೆಟಿಸ್–ಟೈಗ್ರಿಸ್ ನದೀ ಪ್ರದೇಶ), ಈಜಿಪ್ಟ್ ಮತ್ತು ಸಿಂಧೂನದೀ ಪ್ರದೇಶಗಳಲ್ಲಿ ಇದ್ದುವು.

ನೀರಿನ ಸರಬರಾಜು ಧಾರಾಳವಾಗಿದ್ದು ಹವೆ ಅತಿಯಾದ ಏಳು ಬೀಳುಗಳ ನಡುವೆ ಉಯ್ಯಾಲಾಡದಿದ್ದ ಪ್ರದೇಶಗಳಲ್ಲಿ ಮನುಷ್ಯ ಸಮುದಾಯ ಚೆನ್ನಾಗಿ ಬದುಕಿ ಬಾಳಿರುವುದನ್ನು ಕಾಣುತ್ತೇವೆ. ಇಂಥ ಒಂದು ಅನುಕೂಲ ಸನ್ನಿವೇಶ ಸುಮಾರು 5,000 ವರ್ಷಗಳ ಹಿಂದೆ ಭಾರತ ಪರ್ಯಾಯ ದ್ವೀಪದ ಸಿಂಧೂನದಿಯ ಕಣಿವೆಯಲ್ಲಿಯೂ ಮೆಸಪೊಟೇಮಿಯದಲ್ಲಿಯೂ ಈಜಿಪ್ಟಿನ ನೈಲ್ ನದಿಯ ದಂಡೆಯಲ್ಲಿಯೂ ಇತ್ತು. ಅವುಗಳಲ್ಲಿ ನೆಲೆಸಿದ ಜನ ಶಾಂತಿ ಸುವ್ಯವಸ್ಥೆಗಳಿಂದ ಕೂಡಿದ ಸಮಾಜಗಳನ್ನು ಕಟ್ಟಿದರು. ಇಹಲೋಕ ಪರಲೋಕಗಳ ಬಗ್ಗೆ ವ್ಯಾಪಕವಾಗಿ ಚಿಂತನೆ ನಡೆಸಿದರು. ನೀರಾವರಿ, ಬೇಸಾಯ, ಓದು ಬರಹ, ಶಿಲ್ಪ ಮೊದಲಾದ ಪರಿ ಪರಿ ಕ್ಷೇತ್ರಗಳಲ್ಲಿ ದಿಟ್ಟವಾಗಿ ಮುನ್ನಡೆದ ಮೊದಲಿಗರಾದರು.

ಮನುಷ್ಯನಿಗಿಂತ ಎಷ್ಟೋ ಹೆಚ್ಚು ಕಾಲ ಜೀವಿಸಿರುವ ಪ್ರಾಣಿಗಳಿವೆ. ಆದರೆ ಮನುಷ್ಯನಂತೆ ಕುತೂಹಲ ಮತ್ತು ಬುದ್ಧಿ ಸಾಮರ್ಥ್ಯ ಇರುವ ಪ್ರಾಣಿ ಬೇರೆ ಇಲ್ಲ. ಅವನಿಗೆ ಭೂಮಿಯು ಹೊರಗೆ ಜೀವಿ ಇದೆಯೋ ಎಂದು ತಿಳಿಯುವ ಆಸೆ ಉಂಟು. ಹಾಗೆಯೇ ಪ್ರತ್ಯೇಕ ಜೀವಿಯನ್ನು ಇಲ್ಲಿಯೇ ಸೃಷ್ಟಿಸಲಾದೀತೇ ಎಂಬ ಕುತೂಹಲವೂ ಇದೆ.

## ಎಂದೂ ಮುಗಿಯದ ಕತೆ

ಸುಮಾರು **30,000** ವರ್ಷಗಳಿಂದ ಈಚೆಗೆ ಮನುಷ್ಯನಲ್ಲಿ ದೈಹಿಕವಾಗಿ ವಿಶೇಷ ಬದಲಾವಣೆ ಆಗಿಲ್ಲ. ಇದೇ ವೇಳೆಯಲ್ಲಿ ಅವನು ಪ್ರಕೃತಿಯ ಅನೇಕ ನಿಗೂಢ ರಹಸ್ಯಗಳನ್ನು ಆವಿಷ್ಕರಿಸಿದ್ದಾನೆ: ಮತ್ತು ತನ್ಮೂಲಕ ತನ್ನ ಬದುಕಿಗೆ ಬೇಕಾದ ನಾನಾ ತರಹದ ತಂತ್ರಗಳನ್ನು ರೂಪಿಸಿದ್ದಾನೆ. ಕೆಲಸಕ್ಕೆ ಸಹಾಯಕವಾದ ಯಂತ್ರಗಳನ್ನು ರಚಿಸಿದ್ದಾನೆ. ಭೂಮಿಯಿಂದ ಚಂದ್ರನಲ್ಲಿಗೆ ಕೂಡ ಹೋಗಿ ಮರಳಿದ್ದಾನೆ.

ಭೂಮಿಯ ದೀರ್ಘ ಚರಿತ್ರೆಯಲ್ಲಿ ಮನುಷ್ಯನ ಕತೆ ತೀರ ಈಚೆಗಿನದು. ನೀನು ಓದುತ್ತಿರುವ ಈ ಪುಸ್ತಕ ಭೂಮಿಯ ಕತೆಯನ್ನು ಹೇಳುತ್ತಿದೆ ಎಂದು ಭಾವಿಸು. ಆಗ ಇದರಲ್ಲಿ ಮನುಷ್ಯನ ಕತೆಗೆ ಕೊನೆಯ ಪುಟದ ಕೊನೆಯ ಸಾಲಿನ ಕೊನೆಯಲ್ಲಿ ಬರುವ ಪದದ ಸ್ಥಾನ ದೊರೆಯುವುದೂ ಕಷ್ಟ. ಆದ್ದರಿಂದ ಮನುಷ್ಯನ ಕತೆಗೆ ಮುಕ್ತಾಯ ಎಂಬುದಿಲ್ಲ, ವಿಕಾಸ ವೃಕ್ಷದ ಬೆಳವಣಿಗೆಗೆ ಕೊನೆ ಎಂಬುದೂ ಇಲ್ಲ.





**ಈ ಮಾಲೆಯ ಪ್ರಕಟಣೆಗಳು**

- ಆಕಾಶದ ಅದ್ಭುತಗಳು
- ಮನುಷ್ಯನ ಕತೆ
- ಹಕ್ಕಿಗಳು
- ಸಂಚಾರ ಸಾಧನಗಳು
- ಶಿಲೆಗಳು ಖನಿಜಗಳು
- ನಮ್ಮ ಭೂಮಿ
- ಹೂವುಗಳು
- ಕೀಟಗಳು
- ಕಾಲಮಾಪನೆ
- ನಮ್ಮ ದೇಹ
- ಪ್ರಕೃತಿಯಲ್ಲಿ ನೀರು
- ಗಿಡಮರಗಳು
- ಸಾಕು ಪ್ರಾಣಿಗಳು
- ಆರೋಗ್ಯ ಮತ್ತು ನೈರ್ಮಲ್ಯ
- ಗತಕಾಲದ ಪ್ರಾಣಿಗಳು
- ಜೀವ ವಿಕಾಸ



ಐಬಿಎಚ್ ಪ್ರಕಾಶನ
ಗಾಂಧಿನಗರ, ಬೆಂಗಳೂರು-560 009